# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 297

ಸದಸ್ಯರ ಹೆಸರು : ಶ್ರೀ ಕಾಂತರಾಜ್ (ಬಿಎಂಎಲ್)
(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 04-03-2020

ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ಭೂ ಕಂದಾಯ ಕಾಯ್ದೆ, 1964 ಕಲಂ 95(2) ರಡಿಯಲ್ಲಿ ಕೃಷಿ ಭೂಮಿಯನ್ನು ಕೃಷಿಯೇತರ ಉದ್ದೇಶಕ್ಕಾಗಿ ಪರಿವರ್ತಿಸುವ ಆದೇಶಗಳ ಮೇಲೆ ಕಡ್ಡಾಯವಾಗಿ ಡಿಜಿಟಲ್ ಸಹಿ (Digital signature) ಮಾಡಿ, ಭೂ ಪರಿವರ್ತನಾ ಕೋರಿಕೆಗಳನ್ನು ಭೂ ಪರಿವರ್ತನಾ ತಂತ್ರಾಂಶದ ಮುಖಾಂತರ ದಿನಾಂಕ: 01/03/2018 ರಿಂದ ನಿರ್ವಹಿಸತಕ್ಕದ್ದು ಎಂದು ಸುತ್ತೋಲೆ ಹೊರಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಬಂದಿದ್ದಲ್ಲಿ, ದಿನಾಂಕ: 01/03/2018 ರಿಂದ 01/03/2019ರವರೆಗೆ ಸರ್ಕಾರದ ಸುತ್ತೋಲೆಯಂತೆ ಭೂ ಪರಿವರ್ತನೆಗಾಗಿ ಎಷ್ಟು ಅರ್ಜಿಗಳನ್ನು ರಾಜ್ಯದ ಆಯಾ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಸ್ವೀಕರಿಸಲಾಗಿದೆ ಮತ್ತು ಎಷ್ಟು ಪ್ರಕರಣಗಳಲ್ಲಿ ಜಿಲ್ಲಾಧಿಕಾರಿಗಳು ಡಿಜಿಟಲ್ ಸಹಿ ಮಾಡಿ ಆದೇಶಗಳನ್ನು ಹೊರಡಿಸಿರುತ್ತಾರೆ; (ಜಿಲ್ಲಾವಾರು ಅಂಕಿ ಅಂಶಗಳನ್ನು ನೀಡುವುದು) | **ಅನುಬಂಧ-1ರಲ್ಲಿ ಸಲ್ಲಿಸಿದೆ.** |
| ಇ) | ಈ ರೀತಿ ಭೂ ಪರಿವರ್ತನೆ ತಂತ್ರಾಂಶ ಮುಖಾಂತರ ಭೂ ಪರಿವರ್ತನೆ ಅರ್ಜಿಗಳನ್ನು ಸಲ್ಲಿಸಲು ಅರ್ಜಿದಾರರು ಜಿಲ್ಲಾಧಿಕಾರಿಗಳ ಕಛೇರಿಯನ್ನು ಸಂಪರ್ಕಿಸಿದಾಗ ಭೂ ಕಂದಾಯ ಅಧಿನಿಯಮ ಹಾಗೂ ಭೂ ಕಂದಾಯ ಕಾನೂನು ಅಡಿಯಲ್ಲಿ ಅವಕಾಶ ಕಲ್ಪಿಸಿಲ್ಲದಿದ್ದರೂ ಸಹ ಭೂಪರಿವರ್ತನಾ ಅರ್ಜಿಯೊಂದಿಗೆ ಭೂ ಪರಿವರ್ತನೆ ಆಗಬೇಕಾದ ಜಮೀನಿಗೆ ಭೂ ದಾಖಲೆಗಳ ಇಲಾಖೆಯಿಂದ 11 ಇ ನಕ್ಷೆ ಮತ್ತು ತಾಲ್ಲೂಕು ಸರ್ವೆಯರ್‌ರವರಿಂದ ಮ್ಯಾನುಯಲ್ ನಕ್ಷೆಗಳನ್ನು ಹಾಜರುಪಡಿಸಬೇಕು ಎಂದು ತಿಳಿಸಿ, ಸ್ವೀಕೃತಿಯನ್ನು ನೀಡದೆ ಇರುವ ಅಂಶ ಸರ್ಕಾರಕ್ಕೆ ಗಮನಕ್ಕೆ ಬಂದಿದೆಯೇ; | ಇಂತಹ ಯಾವುದೇ ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಈ) | ಸಾರ್ವಜನಿಕ ಹಿತದೃಷ್ಟಿಯಿಂದ, ರೈತರಿಗೆ ಅನುಕೂಲವಾದಂತೆ 11ಇ ನಕ್ಷೆ ಮತ್ತು ತಾಲ್ಲೂಕು ಸರ್ವೆಯರ್ ನಕ್ಷೆಗಳನ್ನು ಹಾಜರುಪಡಿಸದಿದ್ದರೂ ಸಹ ಭೂ ಪರಿವರ್ತನೆ ಅರ್ಜಿಗಳನ್ನು ಸ್ವೀಕರಿಸಲು ಜಿಲ್ಲಾಧಿಕಾರಿಗಳಿಗೆ ಸರ್ಕಾರ ಕೂಡಲೇ ಸುತ್ತೋಲೆ ಹೊರಡಿಸಲು ಕ್ರಮ ತೆಗೆದುಕೊಳ್ಳುವುದೆ; (ಸ್ಪಷ್ಟ ಉತ್ತರ ನೀಡುವುದು) | ಏಕ ಮಾಲೀಕತ್ವದ ಪಹಣಿಯಲ್ಲಿನ ಪೂರ್ಣ ವಿಸ್ತೀರ್ಣವನ್ನು ಭೂಪರಿವರ್ತನೆಗಾಗಿ ಸಲ್ಲಿಸಲಾಗುವ ಅರ್ಜಿಗಳಲ್ಲಿ ಭೂಪರಿವರ್ತನಾ ಪೂರ್ವನಕ್ಷೆಯನ್ನು (Pre Conversion Sketch) ಅರ್ಜಿದಾರರು ಸಲ್ಲಿಸದಿದ್ದಲ್ಲಿ, ಭೂಪರಿವರ್ತನೆ ಕೋರಿದ ಜಮೀನಿಗೆ ರಸ್ತೆ ಸಂಪರ್ಕ, ಅಧಿಕ ಪ್ರಸರಣ ವಿದ್ಯುತ್ ತಂತಿಗಳು, ಈಗಾಗಲೇ ಅಸ್ತಿತ್ವದಲ್ಲಿರುವ ಕಟ್ಟಡಗಳು ಹಾಗೂ ಕೆರೆ ಇತ್ಯಾದಿಗಳು ಅಸ್ತಿತ್ವದಲ್ಲಿರುವ ಬಗ್ಗೆ ಮಾಹಿತಿಯನ್ನು ತಿಳಿಯುವುದು ಕಷ್ಟಸಾಧ್ಯವಾದ್ದರಿಂದ, ಭೂಪರಿವರ್ತನೆಗಾಗಿ ಸಲ್ಲಿಸಲಾಗುವ ಎಲ್ಲಾ ಅರ್ಜಿದಾರರ (ಏಕಮಾಲೀಕತ್ವದ ಭಾಗಶಃ ವಿಸ್ತೀರ್ಣ, ಪೂರ್ಣ ವಿಸ್ತೀರ್ಣ |

| | | |
|---|---|---|
| | | ಮತ್ತು ಬಹುಮಾಲೀಕತ್ವದ ಭಾಗಶಃ ವಿಸ್ತೀರ್ಣ, ಪೂರ್ಣ ವಿಸ್ತೀರ್ಣ) ಭೂಪರಿವರ್ತನಾ ಪೂರ್ವನಕ್ಷೆಯನ್ನು ಮೋಜಣಿ ತಂತ್ರಾಂಶದ ಮೂಲಕ ಕಡ್ಡಾಯವಾಗಿ ಪಡೆದು ಸಲ್ಲಿಸತಕ್ಕದ್ದೆಂದು ಸುತ್ತೋಲೆ ಸಂಖ್ಯೆ: ಕಂಇ 42 ಎಲ್‌ಜಿಪಿ 2020 (ಇ); ದಿನಾಂಕ: 12.02.2020 ರ ಸುತ್ತೋಲೆಯನ್ನು ಹೊರಡಿಸಿದೆ. ಪ್ರತಿಯನ್ನು **ಅನುಬಂಧ-2**ರಲ್ಲಿ ಸಲ್ಲಿಸಿದೆ. |

**ಸಂಖ್ಯೆ: ಆರ್‌ಡಿ 08 ಎಲ್‌ಜಿಕ್ಯೂ 2020**

(ಆರ್.ಅಶೋಕ)
ಕಂದಾಯ ಸಚಿವರು

ಅನುಬಂಧ-1

| ಕ್ರ.ಸಂ. | ಜಿಲ್ಲೆ | ಸ್ವೀಕೃತವಾದ ಭೂಪರಿವರ್ತನಾ ಅರ್ಜಿಗಳ ಸಂಖ್ಯೆ | ಜಿಲ್ಲಾಧಿಕಾರಿಗಳು ಡಿಜಿಟಲ್ ಸಹಿ ಮಾಡಿದ ಹೊರಡಿಸಿರುವ ಆದೇಶಗಳ ಸಂಖ್ಯೆ |
|---|---|---|---|
| 1. | ಬೆಂಗಳೂರು ನಗರ ಜಿಲ್ಲೆ | 2558 | 1003 |
| 2. | ಬೆಂಗಳೂರು ಗ್ರಾಮಾಂತರ ಜಿಲ್ಲೆ | 543 | 452 |
| 3. | ಬೆಳಗಾವಿ ಜಿಲ್ಲೆ | 424 | 236 |
| 4. | ಬಳ್ಳಾರಿ ಜಿಲ್ಲೆ | 2289 | 811 |
| 5. | ಬೀದರ್ ಜಿಲ್ಲೆ | 1142 | 340 |
| 6. | ವಿಜಯಪುರ ಜಿಲ್ಲೆ | 585 | 585 |
| 7. | ಬಾಗಲಕೋಟೆ ಜಿಲ್ಲೆ | 119 | 119 |
| 8. | ಚಿಕ್ಕಮಗಳೂರು ಜಿಲ್ಲೆ | 1524 | 931 |
| 9. | ಚಿತ್ರದುರ್ಗ ಜಿಲ್ಲೆ | 302 | 302 |
| 10. | ಚಾಮರಾಜನಗರ ಜಿಲ್ಲೆ | 196 | 196 |
| 11. | ಚಿಕ್ಕಬಳ್ಳಾಪುರ ಜಿಲ್ಲೆ | 1011 | 333 |
| 12. | ದಕ್ಷಿಣ ಕನ್ನಡ ಜಿಲ್ಲೆ | 910 | 910 |
| 13. | ಧಾರವಾಡ ಜಿಲ್ಲೆ | 183 | 51 |
| 14. | ದಾವಣಗೆರೆ ಜಿಲ್ಲೆ | 927 | 524 |
| 15. | ಕಲಬುರ್ಗಿ ಜಿಲ್ಲೆ | 169 | 41 |
| 16. | ಗದಗ ಜಿಲ್ಲೆ | 315 | 139 |
| 17. | ಹಾಸನ ಜಿಲ್ಲೆ | 3202 | 2247 |
| 18. | ಹಾವೇರಿ ಜಿಲ್ಲೆ | 184 | 120 |
| 19. | ಕೊಡಗು ಜಿಲ್ಲೆ | 458 | 93 |
| 20. | ಕೋಲಾರ ಜಿಲ್ಲೆ | 231 | 183 |
| 21. | ಕೊಪ್ಪಳ ಜಿಲ್ಲೆ | 448 | 274 |
| 22. | ಮಂಡ್ಯ ಜಿಲ್ಲೆ | 483 | 297 |
| 23. | ಮೈಸೂರು ಜಿಲ್ಲೆ | 1537 | 1072 |
| 24. | ರಾಯಚೂರು ಜಿಲ್ಲೆ | 686 | 667 |
| 25. | ರಾಮನಗರ ಜಿಲ್ಲೆ | 322 | 105 |
| 26. | ಶಿವಮೊಗ್ಗ ಜಿಲ್ಲೆ | 545 | 388 |
| 27. | ತುಮಕೂರು ಜಿಲ್ಲೆ | 550 | 507 |
| 28. | ಉತ್ತರ ಕನ್ನಡ ಜಿಲ್ಲೆ | 1344 | 875 |
| 29. | ಉಡುಪಿ ಜಿಲ್ಲೆ | 1861 | 1009 |
| 30. | ಯಾದಗಿರಿ ಜಿಲ್ಲೆ | 158 | 110 |
| ಒಟ್ಟು | | **25206** | **14920** |

ಅನುಬಂಧ - ಬ



ಕರ್ನಾಟಕ ಸರ್ಕಾರ

ಸಂಖ್ಯೆ: ಕಂಇ 42 ಎಲ್‌ಜಿಪಿ 2020 (ಇ)

ಕರ್ನಾಟಕ ಸರ್ಕಾರ ಸಚಿವಾಲಯ
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ:12/02/2020

## ಸುತ್ತೋಲೆ

ವಿಷಯ: ಭೂ ಪರಿವರ್ತನೆ ಕೋರಿ ಸಲ್ಲಿಸಲಾಗುವ ಅರ್ಜಿಗಳಿಗೆ ಭೂ ಪರಿವರ್ತನಾ ಪೂರ್ವ ನಕ್ಷೆ (Pre-Conversion Sketch) ಸಲ್ಲಿಸುವುದನ್ನು ಕಡ್ಡಾಯಗೊಳಿಸುವ ಬಗ್ಗೆ.

* * *

ಕರ್ನಾಟಕ ಭೂ ಕಂದಾಯ ಕಾಯ್ದೆ, 1964ರ ಕಲಂ 95(2)ರಡಿ ಕೃಷಿ ಜಮೀನನ್ನು ಕೃಷಿಯೇತರ ಉದ್ದೇಶಕ್ಕಾಗಿ ಭೂ ಪರಿವರ್ತನೆ ಕೋರಿ ಸಲ್ಲಿಸಲಾಗುವ ಅರ್ಜಿಗಳನ್ನು ನಿರ್ವಹಿಸುವ ಕುರಿತು ಸರ್ಕಾರದ ಸುತ್ತೋಲೆ ಸಂಖ್ಯೆ: ಆರ್‌ಡಿ 07 ಎಲ್‌ಜಿಪಿ 1999, ದಿನಾಂಕ: 07/06/1999ರ ಖಂಡಿಕೆ: 09ರಲ್ಲಿ, ಭೂ ಪರಿವರ್ತನೆ ಕೋರಿ ಸಲ್ಲಿಸಲಾಗುವ ಅರ್ಜಿಗಳಿಗೆ ತಹಶೀಲ್ದಾರರು / ಜಿಲ್ಲಾಧಿಕಾರಿಗಳಿಗೆ ಪ್ರಸ್ತಾವನೆ ಸಲ್ಲಿಸುವಾಗ 'ಕಂದಾಯ ನಕ್ಷೆ (revenue Sketch)' ಸಲ್ಲಿಸಬೇಕೆಂದು ತಿಳಿಸಲಾಗಿರುತ್ತದೆ.

ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 67 ಎಲ್‌ಜಿಪಿ 2018, ದಿನಾಂಕ: 20/02/2019ರ ಮೂಲಕ ಕರ್ನಾಟಕ ಭೂ ಕಂದಾಯ ಕಾಯ್ದೆ, 1964ರ ಕಲಂ 95(2)ರಡಿ ಕಲ್ಪಿಸಲಾಗಿರುವ ಅವಕಾಶದಂತೆ ಕೃಷಿ ಜಮೀನನ್ನು ಕೃಷಿಯೇತರ ಉದ್ದೇಶಕ್ಕೆ ಬದಲಾಯಿಸಲು ಭೂ ಪರಿವರ್ತನಾ ವಿಧಾನವನ್ನು ಸರಳಗೊಳಿಸಲು ಕೆಲವೊಂದು ಷರತ್ತುಗಳನ್ನು ವಿಧಿಸಲಾಗಿರುತ್ತದೆ. ಅದರಂತೆ, ಅಫಿಡವಿಟ್ ಆಧಾರಿತ ಭೂ ಪರಿವರ್ತನೆ ತಂತ್ರಾಂಶದಲ್ಲಿ ಅರ್ಜಿ ಸಲ್ಲಿಸುವಾಗ ಅರ್ಜಿದಾರರು ಒಂದು ಸರ್ವೆ ನಂಬರಿನ ಭಾಗಶಃ ವಿಸ್ತೀರ್ಣವನ್ನು ಭೂ ಪರಿವರ್ತನೆಗೆ ವಿನಂತಿಸಿದಲ್ಲಿ 11-ಇ ನಕ್ಷೆ ಸಲ್ಲಿಸುವುದನ್ನು ಕಡ್ಡಾಯಗೊಳಿಸಲಾಗಿದೆ.

ಪ್ರಸ್ತುತ, ಏಕಮಾಲೀಕತ್ವದ ಪಹಣಿಯಲ್ಲಿನ ಪೂರ್ಣ ವಿಸ್ತೀರ್ಣವನ್ನು ಭೂ ಪರಿವರ್ತನೆ ಕೋರಿ ಸಲ್ಲಿಸಲಾಗುವ ಅರ್ಜಿಗಳಲ್ಲಿ ಭೂ ಪರಿವರ್ತನಾ ಪೂರ್ವ ನಕ್ಷೆಯನ್ನು (Pre-Conversion Sketch) ಅರ್ಜಿದಾರರು ಸಲ್ಲಿಸದಿದ್ದಲ್ಲಿ ಭೂ ಪರಿವರ್ತನೆ ಕೋರಿದ ಜಮೀನಿಗೆ ರಸ್ತೆ ಸಂಪರ್ಕ, ಅಧಿಕ ಪ್ರಸರಣ ವಿದ್ಯುತ್ ತಂತಿಗಳು, ಈಗಾಗಲೇ ಅಸ್ತಿತ್ವದಲ್ಲಿರುವ ಕಟ್ಟಡಗಳು ಹಾಗೂ ಕೆರೆ ಇತ್ಯಾದಿಗಳ ಅಸ್ತಿತ್ವದ ಬಗ್ಗೆ ಮಾಹಿತಿ ತಿಳಿಯುವುದು ಕಷ್ಟಸಾಧ್ಯ. ಆದ್ದರಿಂದ ಭೂ ಪರಿವರ್ತನೆ ಕೋರಿ ಸಲ್ಲಿಸಲಾಗುವ ಎಲ್ಲಾ ಅರ್ಜಿದಾರರು (ಏಕಮಾಲೀಕತ್ವದ ಭಾಗಶಃ ವಿಸ್ತೀರ್ಣ, ಪೂರ್ಣ ವಿಸ್ತೀರ್ಣ ಮತ್ತು ಬಹುಮಾಲೀಕತ್ವದ ಭಾಗಶಃ ವಿಸ್ತೀರ್ಣ, ಪೂರ್ಣ ವಿಸ್ತೀರ್ಣ) ಭೂ ಪರಿವರ್ತನಾ ಪೂರ್ವ ನಕ್ಷೆಯನ್ನು ಮೋಜಣಿ ತಂತ್ರಾಂಶದ ಮೂಲಕ ಕಡ್ಡಾಯವಾಗಿ ಪಡೆದು ಸಲ್ಲಿಸತಕ್ಕದ್ದು.

(ಗೋಪಾಲಯ್ಯ ಎನ್.)
ಸರ್ಕಾರದ ಜಂಟಿ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ)

ಸಂಕಲನಕಾರರು, ಕರ್ನಾಟಕ ರಾಜ್ಯ ಪತ್ರ, ವಿಕಾಸಸೌಧ ಘಟಕ, ವಿಕಾಸಸೌಧ, ಬೆಂಗಳೂರು (ಇದನ್ನು ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಪ್ರಕಟಿಸಿ 50 ಪ್ರತಿಗಳನ್ನು ಒದಗಿಸುವಂತೆ ಕೋರಿದೆ)

ಇವರಿಗೆ,

1. ಮಹಾಲೇಖಪಾಲರು (ಎ ಮತ್ತು ಇ, ಲೆಕ್ಕಪರಿಶೋಧನೆ-1 ಮತ್ತು 2) ಕರ್ನಾಟಕ, ಬೆಂಗಳೂರು

2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ, ವಿಕಾಸ ಸೌಧ, ಬೆಂಗಳೂರು
3. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಬಹುಮಹಡಿಗಳ ಕಟ್ಟಡ, ಬೆಂಗಳೂರು
4. ಸರ್ಕಾರದ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ, ವಿಕಾಸ ಸೌಧ, ಬೆಂಗಳೂರು
5. ಆಯುಕ್ತರು, ಭೂ ಮಾಪನ ಮತ್ತು ಭೂ ದಾಖಲೆಗಳ ಇಲಾಖೆ, ಕೆ.ಆರ್.ವೃತ್ತ, ಬೆಂಗಳೂರು
6. ಎಲ್ಲಾ ಪ್ರಾದೇಶಿಕ ಆಯುಕ್ತರುಗಳು
7. ಎಲ್ಲಾ ಜಿಲ್ಲಾಧಿಕಾರಿಗಳು
8. ನಿರ್ದೇಶಕರು, ಭೂಮಿ ಉಸ್ತುವಾರಿ ಕೋಶ, ಎಸ್.ಎಸ್.ಎಲ್.ಆರ್ ಕಟ್ಟಡ, ಕೆ.ಆರ್.ವೃತ್ತ, ಬೆಂಗಳೂರು
9. ನಿರ್ದೇಶಕರು, ಅಟಲ್ ಜನಸ್ನೇಹಿ ಕೇಂದ್ರ, ಕೆ.ಆರ್.ವೃತ್ತ, ಬೆಂಗಳೂರು
10. ನಿರ್ದೇಶಕರು, ನಗರ ಯೋಜನಾ ನಿರ್ದೇಶನಾಲಯ, ಬಹುಮಹಡಿಗಳ ಕಟ್ಟಡ, ಬೆಂಗಳೂರು
11. ಸರ್ಕಾರದ ಅಪರ ಕಾರ್ಯದರ್ಶಿ(ಅಂರಾಜವಿ), ಕಾನೂನು ಇಲಾಖೆ, ವಿಧಾನಸೌಧ, ಬೆಂಗಳೂರು
12. ಸರ್ಕಾರದ ಉಪ ಕಾರ್ಯದರ್ಶಿ, ಸಚಿವ ಸಂಪುಟ ಶಾಖೆ, ಸಿ.ಆ.ಸು.ಇ. (ಸಚಿವ ಸಂಪುಟ ವಿಷಯ ಸಂಖ್ಯೆ: 733/2018) ವಿಧಾನಸೌಧ, ಬೆಂಗಳೂರು
13. ಸರ್ಕಾರದ ಉಪ ಕಾರ್ಯದರ್ಶಿ, ಕಂದಾಯ ಇಲಾಖೆ (ಸಮನ್ವಯ) ಬಹುಮಹಡಿ ಕಟ್ಟಡ, ಬೆಂಗಳೂರು (ಕಂಪೆಂಡಿಯಮ್‌ಗಾಗಿ)
14. ರಾಜ್ಯದ ಎಲ್ಲಾ ಉಪ ವಿಭಾಗಾಧಿಕಾರಿಗಳು } (ಜಿಲ್ಲಾಧಿಕಾರಿಗಳ ಮುಖಾಂತರ)
15. ರಾಜ್ಯದ ಎಲ್ಲಾ ತಾಲೂಕಿನ ತಹಶೀಲ್ದಾರ್‌ಗಳು }
16. ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ-7) ವಿಧಾನಸೌಧ, ಬೆಂಗಳೂರು
17. ಶಾಖಾ ರಕ್ಷಾ ಕಡತ / ಹೆಚ್ಚುವರಿ ಪ್ರತಿಗಳು

ಪ್ರತಿಯನ್ನು ಮಾಹಿತಿಗಾಗಿ:

(1) ಮಾನ್ಯ ಕಂದಾಯ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು
(2) ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ಕಂದಾಯ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು
(3) ಸರ್ಕಾರದ ಜಂಟಿ ಕಾರ್ಯದರ್ಶಿಯವರ ಆಪ್ತ ಸಹಾಯಕ, ಕಂದಾಯ ಇಲಾಖೆ (ಭೂ ಮಂಜೂರಾತಿ) ಬಹುಮಹಡಿ ಕಟ್ಟಡ, ಬೆಂಗಳೂರು